# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :: 140(196)
ಸದಸ್ಯರ ಹೆಸರು :: ಶ್ರೀ ಚಿದಾನಂದ್ ಎಂ.ಗೌಡ
ಉತ್ತರಿಸುವ ದಿನಾಂಕ :: 16.02.2022
ಉತ್ತರಿಸುವ ಸಚಿವರು :: ಕಂದಾಯ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಶಿರಾ ತಾಲ್ಲೂಕಿನ ಚಿಕ್ಕನಹಳ್ಳಿಯ ಸ.ನಂ.202 (ಹಳೇ ಸ.ನಂ.190ರ 5.14 ಗುಂಟೆ ವಿಸ್ತೀರ್ಣ ಮತ್ತು ಸ.ನಂ.199/4 ಮತ್ತು 5 (ಹಳೇ ಸ.ನಂ.187/1 ಮತ್ತು 2)ರ 2 ಎಕರೆ ವಿಸ್ತೀರ್ಣದ ಜಮೀನುಗಳನ್ನು ಮಹಾರಾಜ ಸರ್ಕಾರದ ಆದೇಶ ಸಂ:5673-4-L.R.238-5-2, ದಿನಾಂಕ:29-11-1905 ರಂತೆ ಸಂತೆ ನಡೆಸಲು ಹಾಗೂ ಸರ್ಕಾರಿ ಆದೇಶ ಸಂ: R 4769-70/361-07-6 ದಿನಾಂಕ:11-01-1910ರಂತೆ ಧರ್ಮಛತ್ರ ಮತ್ತು ಪಾಠಶಾಲೆ ಕಟ್ಟಲು ಜಮೀನುಗಳನ್ನು ಭೂ ಪರಿವರ್ತನೆಗೊಳಿಸಿ, ಜಿಲ್ಲಾಧಿಕಾರಿಗಳ ಸಂರಕ್ಷಣೆಯಲ್ಲಿ ಸರ್ಕಾರವು ವಹಿಸಿಕೊಂಡಿರುವುದು ನಿಜವೇ; | ಶಿರಾ ತಾಲ್ಲೂಕು, ಕಳ್ಳಂಬೆಳ್ಳ ಹೋಬಳಿ, ಚಿಕ್ಕನಹಳ್ಳಿ ಗ್ರಾಮದ ಸ.ನಂ. 202 (ಹಳೆ ನಂ.ಸ.ನಂ.190ರ 5-14 ಎ/ಗುಂ ವಿಸ್ತೀರ್ಣ) ಜಮೀನುಗಳನ್ನು ಮಹಾರಾಜರ ಸರ್ಕಾರದ ಆದೇಶ ಸಂ.5673-4-ಎಲ್ ಆರ್238-5-5 ದಿನಾಂಕ:29.11.1905 ರಂತೆ ಸಂತೆ ನಡೆಸಲು ಹಾಗೂ ಸರ್ಕಾರಿ ಆದೇಶ ಸಂ:ಆರ್ 4769-70/361-07-6 ದಿನಾಂಕ:11.01.1910ರಂತೆ ಧರ್ಮಛತ್ರ ಮತ್ತು ಪಾಠ ಶಾಲೆ ಕಟ್ಟಲು ಜಮೀನುಗಳನ್ನು ಭೂ ಪರಿವರ್ತಿತಗೊಳಿಸಲಾಗಿದ್ದು, ಪ್ರಸ್ತುತವಾಗಿ ಸ.ನಂ.190, ಸ.ನಂ.190/1 ರಿಂದ ಸ.ನಂ.190/10 ರವರೆಗೆ ಹಿಸ್ಸಾಗಳಾಗಿ ವಿಭಜನೆಯಾಗಿರುತ್ತದೆ. ಪ್ರಶ್ನಿತ ಸ.ನಂ.199/5 ರಲ್ಲಿ 1-00 ಎ/ಗುಂ ಪ್ರದೇಶದಲ್ಲಿ ಅಗ್ರಿಕಲ್ಚರ್ ಸ್ಕೂಲ್ ಹೆಸರಿಗೆ ಹಾಲಿ ಪಹಣಿಯು ಚಾಲ್ತಿಯಲ್ಲಿದ್ದು, ಸ.ನಂ.202ರಲ್ಲಿ ಒಟ್ಟು ವಿಸ್ತೀರ್ಣ 5-10 ಎ/ಗುಂ ಇದ್ದು, ವಿಸ್ತೀರ್ಣ 0-10 ಎ/ಗುಂ ಪ್ರದೇಶದಲ್ಲಿ ಎಸ್.ಕೆ.ಡಿ.ವಿ.ಹೆಚ್.ಎಸ್ ಶಾಲೆಯ ಹೆಸರಿಗೆ ಪಹಣಿ ಚಾಲ್ತಿಯಲ್ಲಿರುತ್ತದೆ. ಸದರಿ ಪ್ರದೇಶದಲ್ಲಿ ಶಾಲಾ ಕಟ್ಟಡವಿದ್ದು, ಶಾಲೆಯು ಸರ್ಕಾರಿ ಶಾಲೆಯಾಗಿರುತ್ತದೆ. ಒಟ್ಟು ವಿಸ್ತೀರ್ಣ 1-10 ಎಕರೆ/ಗುಂಟೆ ಸರ್ಕಾರದ ವಶದಲ್ಲಿರುತ್ತದೆ. ಉಳಿಕೆ ವಿಸ್ತೀರ್ಣಕ್ಕೆ ಹಾಲಿ ಪಹಣಿಯ ರೀತ್ಯಾ ಖಾತೆದಾರರ ಹೆಸರಿಗೆ ಪಹಣಿಯು ಚಾಲ್ತಿಯಲ್ಲಿದ್ದು, ಮಾನ್ಯ ಜಿಲ್ಲಾಧಿಕಾರಿಗಳ ನ್ಯಾಯಾಲಯದಲ್ಲಿ ಆರ್‌ಪಿ 97/2015-16ರ ರೀತ್ಯಾ ಮೇಲ್ಮನವಿ ಪ್ರಕರಣವು ದಾಖಲಾಗಿದ್ದು, ವಿಚಾರಣಾ ಹಂತದಲ್ಲಿರುತ್ತದೆ. |
| ಆ) | ಹಾಗಿದ್ದಲ್ಲಿ ಸ.ನಂ.202, 1912 ರಿಜಿಸ್ಟರ್ ವಿಲ್ನಲ್ಲಿ ನಮೂದಿಸಿರುವಂತೆ ಯಾವ ಕಾರಣಕ್ಕೂ ಸದರಿ ಜಮೀನುಗಳು ಯಾರಿಗೂ ಪರಭಾರೆಯಾಗದಂತೆ ಹಾಗೂ ಈ ಜಮೀನುಗಳ ಸಂಪೂರ್ಣ ಉತ್ಪತ್ತಿಯು ಈ ಪಾಠಶಾಲೆಗೆ ಸೇರಬೇಕೆಂದು ಮುಚ್ಚಳಿಕೆ ಬರೆದು ಕೊಟ್ಟಿದ್ದರ ಮೇರೆಗೆ ಸರ್ಕಾರಿ ಆದೇಶವಾಗಿದ್ದು, ಇಂದು ಈ ಶಾಲೆಗೆ ಬರುವ ದಾರಿಯೂ ಸೇರಿ ಪಾಠಶಾಲೆ ಕಟ್ಟಡಗಳಿರುವ ಸಂಪೂರ್ಣ ಜಮೀನೇ ಪರಬಾರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸ.ನಂ.202, 1912ರ ರಿಜಿಸ್ಟರ್ ವಿಲ್‌ನಲ್ಲಿ ನಮೂದಿಸಿರುವಂತೆ ಯಾವ ಕಾರಣಕ್ಕೂ ಸದರಿ ಜಮೀನುಗಳು ಯಾರಿಗೂ ಪರಭಾರೆಯಾಗದಂತೆ ಹಾಗೂ ಈ ಜಮೀನುಗಳ ಸಂಪೂರ್ಣ ಉತ್ಪತ್ತಿಯು ಈ ಪಾಠಶಾಲೆಗೆ ಸೇರಬೇಕೆಂದು ಮುಚ್ಚಳಿಕೆ ಬರೆದು ಕೊಟ್ಟಿದ್ದರ ಮೇರೆಗೆ ಸರ್ಕಾರಿ ಆದೇಶ ಸಂ:ಆರ್ 4769-70/361-07-6 ದಿನಾಂಕ:11.01.1910 ರ ಪ್ರಕಾರ ಆದೇಶವಾಗಿರುವುದು ಕಂಡು ಬಂದಿದ್ದು, ಸ.ನಂ.202ರಲ್ಲಿ ಒಟ್ಟು ವಿಸ್ತೀರ್ಣ 5-10 ಎ/ಗುಂ ಇದ್ದು, 0-10 ಎ/ಗುಂ ಪ್ರದೇಶದಲ್ಲಿ ಎಸ್.ಕೆ.ಡಿ.ವಿ.ಹೆಚ್.ಎಸ್ ಶಾಲೆಯ ಹೆಸರಿಗೆ ಪಹಣಿ ಚಾಲ್ತಿಯಲ್ಲಿದ್ದು, ಸದರಿ ಪ್ರದೇಶದಲ್ಲಿ ಶಾಲಾ ಕಟ್ಟಡವಿದ್ದು, ಸದರಿ ಶಾಲೆಯು ಸರ್ಕಾರಿ ಶಾಲೆಯಾಗಿದ್ದು, |

| | | |
|---|---|---|
| | | ಸರ್ಕಾರದ ವಶದಲ್ಲಿದ್ದು, ಉಳಿಕೆ ವಿಸ್ತೀರ್ಣಕ್ಕೆ ಹಾಲಿ ಪಹಣಿಯ ರೀತ್ಯಾ ಖಾತೆದಾರರ ಹೆಸರಿಗೆ ಪಹಣಿಯು ಚಾಲ್ತಿಯಲ್ಲಿದ್ದು, ಮಾನ್ಯ ಜಿಲ್ಲಾಧಿಕಾರಿಗಳ ನ್ಯಾಯಾಲಯದಲ್ಲಿ ಆರ್ ಪಿ 97/2015-16 ರ ರೀತ್ಯಾ ಮೇಲ್ಮನವಿ ಪ್ರಕರಣವು ದಾಖಲಾಗಿದ್ದು, ವಿಚಾರಣಾ ಹಂತದಲ್ಲಿದ್ದು, ಪರಭಾರೆಯಾಗಿರುವುದು ಕಂಡುಬಂದಿರುವುದಿಲ್ಲ. |
| ಇ) | ಇನ್ನು ಮುಂದಾದರೂ ಈ ಅಕ್ರಮ ಒತ್ತುವರಿಯನ್ನು ತೆರವುಗೊಳಿಸಿ, ಸರ್ಕಾರಿ ಆದೇಶ ಹಾಗೂ ದಾನಿಗಳ ಮೂಲ ಉದ್ದೇಶದಂತೆ ಸಕ್ರಮಗೊಳಿಸಲು ಸರ್ಕಾರವು ಕ್ರಮ ಕೈಗೊಳ್ಳುವುದೇ? | ಪ್ರಸ್ತಾಪಿತ ಪ್ರದೇಶಕ್ಕೆ ಸಂಬಂಧಿಸಿದಂತೆ, ಮಾನ್ಯ ಜಿಲ್ಲಾಧಿಕಾರಿಗಳ ನ್ಯಾಯಾಲಯದಲ್ಲಿ ಆರ್ ಪಿ 97/2015-16 ರಂತೆ ಮೇಲ್ಮನವಿ ಪ್ರಕರಣ ದಾಖಲಾಗಿ ವಿಚಾರಣಾ ಹಂತದಲ್ಲಿರುತ್ತದೆ. ಪ್ರಕರಣದ ಅಂತಿಮ ಆದೇಶ ವಾದ ನಂತರ, ಅಳತೆ ಕಾರ್ಯ ಕೈಗೊಂಡು ಅಳತೆಯಾದ ನಂತರ ಒತ್ತುವರಿಯಾಗಿರುವುದು ಕಂಡು ಬಂದಲ್ಲಿ, ಕಾನೂನು ರೀತ್ಯಾ ಒತ್ತುವರಿಯನ್ನು ತೆರವುಗೊಳಿಸಲು ನಿಯಮಾನುಸಾರ ಕ್ರಮವಹಿಸಲಾಗುವುದು. |

**ಸಂಖ್ಯೆ: ಆರ್‌ಡಿ 09 ಎಲ್‌ಜಿಟಿ 2022**

**(ಆರ್.ಅಶೋಕ್)**

**ಕಂದಾಯ ಸಚಿವರು**